ನಮ್ಮ ಪ್ರಕಟಣೆಗಳಿಗೆ ಈ ಕೆಳಗೆ ಕಂಡ ವಿಳಾಸಗಳಿಗೆ ಬರೆಯಿರಿ:

## ಆರ್. ಎನ್. ನ್ಯೂಸ್ ಏಜನ್ಸಿ,

ಬೆಂಗಳೂರು.

## ರೇಡಿಯಂಟ್ ನ್ಯೂಸ್ ಏಜನ್ಸಿ,

ಮೈಸೂರು.

## ನಾರ್ತ್ ಕಚೇರಿ,

ಬೆಂಗಳೂರು.



ಮುಂದಿನ ಪುಸ್ತಕ:

## ಅಜಾದ್ ಫೌಜ್ ಕಟ್ಟಿದ್ದು ಹೇಗೆ?

# ಅಜಾದ್ ಪೌಜ್ ಸೋತದ್ದು ಹೇಗೇ ?

---



## ವಿಷಯ ಪ್ರವೇಶ

ಅಜಾದ್ ಹಿಂದ್ ಪೌಜ್! ಅಜಾದ್ ಹಿಂದ್ ಪೌಜ್ ಎಂದರೆ ನಮ್ಮ ಮುಂನೆ ಬಂದು ನಿಲ್ಲುವ ಚಿತ್ರವು ಶ್ರೀ ಸುಭಾಷಚಂದ್ರಬೋಸ್‌ರಿಂದ ನಿರ್ಮಿಸಲ್ಪಟ್ಟಂತಹ ಭಾರತ ಸ್ವಾತಂತ್ರ ಸಾಧನೆಗಾಗಿ ಹೋರಾಟ ನಡೆಸಿದಂತಹ ಸೇನೆ! ಇದರ ವಿಷಯವನ್ನೇ ನಾವೀಗ ಬರೆಯಲು ಹೊರಟಿರುವುದು.

ಅಜಾದ್ ಹಿಂದ್ ಪೌಜ್ ಎಂಬುದು ಎರಡೆಂದು ಹೇಳಲ್ಪಡುತ್ತಾ ಇದೆ. ಒಂದು ಕ್ಯಾಪ್ಟನ್ ಮೋಹನ್‌ಸಿಂಗರಿಂದ ನಿರ್ಮಿಸಲ್ಪಟ್ಟದ್ದು. ಎರಡನೆ ...ದು ಶ್ರೀ ಸುಭಾಷಚಂದ್ರಬೋಸರಿಂದ ಆರಂಭಿಸಲ್ಪಟ್ಟು ನಡಸಲ್ಪಟ್ಟದ್ದು. ...ನೆಯದರ ವಿಷಯಕವಾಗಿ ನಮಗೆ ತಿಳಿದಿರುವಂತಹ ವಿಷಯಗಳೂ ...ವ. ಅದನ್ನು ನಾವೀಗ ಪ್ರಸ್ತಾಪ ಮಾಡುತ್ತಲೂ ಇಲ್ಲ.

ಶ್ರೀ ಸುಭಾಷಚಂದ್ರಬೋಸರಿಂದ ನಿರ್ಮಿಸಲ್ಪಟ್ಟಂತಹ ಅಜಾದ್ ಹಿಂದ್ ಪೌಜ್‌ನ ರಚನೆಯು ೧೯೪೩ನೇ ವರ್ಷದಲ್ಲಿ ಆಯಿತು. ಇದನ್ನು ...ಸಬೇಕೆಂದು ಅದಕ್ಕೆ ಬಹಳ ಮೊದಲಿನಿಂದಲೂ ಶ್ರೀ ಸುಭಾಷಬೋಸರ ...ಸ್ಸಿನಲ್ಲಿ ಇದ್ದಿರಬಹುದು. ಭಾರತವನ್ನು ಬಿಟ್ಟುಹೋಗುವುದಕ್ಕಿಂತಲೂ ಮೊದಲು ಇದ್ದಿರಬಹುದು. ಅನಂತರ ಜರ್ಮನಿಯಲ್ಲಿ ಇದಕ್ಕಾಗಿ ಪ್ರಯತ್ನ ಮಾಡಿರಬಹುದು. ಅಲ್ಲಿ ರಚಿಸಿದಂತಹ ಸೇನೆಯ ಕಾರ್ಯಕಲಾಪಗಳ ವಿಷಯದಲ್ಲಿ ಇದುವರೆಗೆ ನಮಗೆ ತಿಳಿದುಬಂದಿರುವ ವಿವರಗಳು ಬಹಳ ಕಡಮೆ. ಆದರಿಂದ ನಾವು ಆರಂಭವಾಗುವುದು ದೂರಪ್ರಾಚ್ಯದಲ್ಲಿ ಅಜಾದ್ ಹಿಂದ್ ಪೌಜ್ ಸ್ಥಾಪಿಸಿದ ಕಾಲದಿಂದ.

## ಭಿತ್ತಿ ನಿರ್ಮಾಣ

ಕಾರಾಗೃಹದಲ್ಲಿದ್ದಂತಹ ಶ್ರೀ ಸುಭಾಷಚಂದ್ರಬೋಸರು ಅನಾರೋಗ್ಯದ ನಿಮಿತ್ತವಾಗಿ ಬಿಡುಗಡೆಯನ್ನು ಹೊಂದಿದರು. ಆದರೂ ಅವರ ಮೇಲೆ ಪೋಲೀಸರ ಕಾವಲು ಇರಲಿಲ್ಲವೆಂದು ಹೇಳಲಾಗುವುದಿಲ್ಲ. ಒಂದು ದಿನ ಮನೆಯಲ್ಲಿ ಬೋಸರು ಊಟಮಾಡುತ್ತಾ ಕುಳಿತಿದ್ದರಂತೆ. ಆ ದಿನ ಶ್ರೀ ಮೆಹ್ತಾರವರು ಸಹ ಅವರ ಮನೆಗೆ ಅತಿಥಿಗಳಾಗಿ ಬಂದಿದ್ದರಂತೆ. ಊಟಮಾಡುತ್ತಿದ್ದ ಶ್ರೀ ಸುಭಾಷರು ನಾನು ಎಲ್ಲಿಗೋ ಹೋಗಬೇಕಾಗಿದೆ. ಆದ್ದರಿಂದ ಎದ್ದುಹೋಗುತ್ತೇನೆ. ಕ್ಷಮಿಸಿರಿ, ಆದರೆ ಎಲ್ಲಿಗೆ ಹೋಗುವೆನೆಂಬುದನ್ನೀವಾಗ ತಿಳಿಸಲಾರೆ - ಎಂದು ಹೇಳಿ ಹೊರಟುಹೋದರಂತೆ. ಆದರೆ ಅವರು ಯಾವ ರೀತಿ ಭಾರತದ ದಡವನ್ನು ಬಿಟ್ಟರೋ, ಯಾವ ರೀತಿ ಮುಂದೆ ಪ್ರಯಾಣ ಬೆಳಸಿದರೋ ಅದು ಗೊತ್ತಿಲ್ಲ.

ಅನಂತರ ಬೋಸರು ಯೂರೋಪಿನಲ್ಲಿ ಅಕ್ಷರಾಜ್ಯಗಳಲ್ಲಿ ಇದ್ದರೆಂಬುದನ್ನು ನಾವು ಕೇಳಿದೆವು.

ಇದು ಹೀಗಿರಲಿ. ದೂರಪ್ರಾಚ್ಯದ ಕಡೆ ನೋಡೋಣ. ಆ ಕಾಲದಲ್ಲಿ ದೂರಪ್ರಾಚ್ಯದಲ್ಲಿ ಭಾರತ ಸ್ವಾತಂತ್ರ್ಯೋದ್ಯಮದ ವಿಷಯಕವಾದ ಆಸಕ್ತಿಯು ಕಾರ್ಯರೂಪಕ್ಕೆ ಬರುತ್ತಿತ್ತು. ಈ ಪ್ರಯತ್ನವು ದೂರಪ್ರಾಚ್ಯದ ನಾನಾ ಭಾಗಗಳಲ್ಲಿ ಸ್ವಲ್ಪವಾಗಿಯೋ ಹೆಚ್ಚಾಗಿಯೋ ಆರಂಭವಾಗಿದ್ದಿತು. ಮುಖ್ಯವಾಗಿ ಮಲಯದಲ್ಲಿಯೂ ಅಲ್ಲಿನ ಭಾರತೀಯರು ಇದರಲ್ಲಿ ಆಸಕ್ತರಾಗಿದ್ದರು. ಆದರೆ ಅವರಿಗೆ ಇವನ್ನು ಆರಂಭಮಾಡುವ ವಿಧಾನವು ತಿಳಿಯದೆ ಇದ್ದಿತೋ ಏನೋ ಸುಮ್ಮನಿದ್ದರು. ಅನಂತರ ಸಿಂಗಪುರದ ಪತನಾನಂತರ ಜಪಾನೀ ಸೈನ್ಯಾಧಿಕಾರಿ ಮೇಜರ್ ಫೂಜೀವಾರಾ ಅಲ್ಲಿನ ಭಾರತೀಯರನ್ನು ಕರೆಸಿ ಭಾರತ ಸ್ವಾತಂತ್ರ್ಯಕ್ಕಾಗಿ ಪ್ರಯತ್ನಮಾಡುವುದಾದರೆ ತಾವು ಸಹಾಯ ಕೊಡುವುದಾಗಿ ಹೇಳಿದರು. ಆದರೆ ಅಲ್ಲಿನ ಭಾರತೀಯ ಮುಂದಾಳುಗಳು ಇದನ್ನು ಶಂಕಿಸಿದ್ದರಿಂದ ಹಠಾತ್ತನೆ ಕಾರ್ಯಾರಂಭ ಮಾಡಲಿಲ್ಲವೆಂದು ಕಂಡುಬರುತ್ತದೆ.

ಅನಂತರ ಈ ವಿಷಯದಲ್ಲಿ ಪ್ರಯತ್ನಗಳನ್ನು ನಡೆಯಿಸಿ ಮುಂದೆ ಕೊಂಡುಹೋದವರು ಶ್ರೀ ರಾಸ್‌ಬಿಹಾರಿ ಬೋಸ್. ಇವರು ಮೂವತ್ತು ವರ್ಷಗಳ ಹಿಂದೆ ಭಾರತದಲ್ಲಿದ್ದ ಕ್ರಾಂತಿಕಾರರಲ್ಲಿ ಒಬ್ಬರು ಆಗ ಪ್ರಾಪ್ತವಾದಂತಹ ಘಟನೆಗಳಿಂದ ಅವರು ಹೇಗೋ ದೇಶತ್ಯಾಗವನ್ನು ಮಾಡಿ-ಜಪಾನಿಗೆ ಹೋಗಿ ನೆಲೆಸಿದ್ದರು. ಈ ಮೂವತ್ತು ವರ್ಷಗಳಿಂದ ಭಾರತ ಸ್ವಾತಂತ್ರ್ಯಕ್ಕಾಗಿ ಇವರು ಏನು ಪ್ರಯತ್ನಮಾಡಿದರೋ ಏನೋ, ನಮಗೆ ತಿಳಿದಿರುವವರೆಗೆ ಅವರಾವ ಬಗೆಯ ಭಾರತ ಸ್ವಾತಂತ್ರ್ಯ ಪ್ರಯತ್ನವನ್ನೂ ಮಾಡಲಿಲ್ಲ. ಮಾಡಿದ್ದರೂ ಅದಷ್ಟು ಪ್ರಭಾವಶಾಲಿಯಾದುದಲ್ಲ.

ಇದರ ಮೇಲೆ ಮೂವತ್ತು ವರ್ಷಗಳಕಾಲ ಜಪಾನಿನಲ್ಲಿದ್ದು-ಅಲ್ಲಿಯ ನಾಗರಿಕನಾಗಿದ್ದುದರಿಂದ ಶ್ರೀ ಸುಭಾಷ ಬೋಸರಂತೆ ಜಪಾನರ ಮೇಲೆ ಪರಿಣಾಮವುಂಟು ಮಾಡುವಷ್ಟು ಇವರು ಶಕ್ತರಾಗಿರಲಿಲ್ಲವೆಂದೇ ಹೇಳಬಹುದು. ಆದರೂ ಒಂದು ಬಗೆಯಾಗಿ ಸ್ವಾತಂತ್ರ್ಯೋದ್ಯಮ ಪ್ರಯತ್ನವು ಸಾಗಿತ್ತು.

ಈ ಸ್ವಾತಂತ್ರ್ಯೋದ್ಯಮಿಗಳಿಗೂ ಜಪಾನ್ ಅಧಿಕಾರಿಗಳಿಗೂ ಈ ಮಧ್ಯೆ ಭಿನ್ನಾಭಿಪ್ರಾಯಗಳು ಬಂದವು ಕ್ಯಾಪ್ಟನ್ ಮೋಹನಸಿಂಗರ ದಸ್ತಗಿರಿಯಿಂದ ಇದು ವಿಪರೀತವಾಗಿ ಸ್ವಾತಂತ್ರ್ಯೋದ್ಯಮದ ಪ್ರಯತ್ನವು ಸ್ಥಂಭಿತವಾಯಿತು.

ಇಂತಹ ಸಮಯದಲ್ಲಿ ಶ್ರೀ ಸುಭಾಷ್ ಬೋಸರು ಬರ್ಲಿನ್‌ನಿಂದ ಬಂದು ರೇಡಿಯೋ ಭಾಷಣವನ್ನು ಮಾಡಿದರು. ಅವರು ಹೇಳಿದರು—

"ಬ್ರಿಟಿಷರು ಎಷ್ಟು ಪ್ರಚಾರ ಮಾಡಿದರೂ ಸಹ ಭಾರತಕ್ಕೆಬ್ರಿಟಿಷರೇ ಶತ್ರುಗಳೆಂಬುದನ್ನು ವಿವೇಕಿಗಳಾದ ಭಾರತೀಯರೆಲ್ಲರೂ ಬಲ್ಲರು. ಬ್ರಿಟಿಷ್ ಸಾಮ್ರಾಜ್ಯ ಷಾಹೀ ಸೋತರೆ ಭಾರತ ಸ್ವತಂತ್ರವಾಗುವುದು. ಒಂದುವೇಳೆ ಅವರು ಹೇಗೋ ಜಯಿಸಿದರೆ ಭಾರತಕ್ಕೆ ಶಾಶ್ವತ ದಾಸ್ಯ. ಈಗ ದಾಸ್ಯ-ಸ್ವಾತಂತ್ರ್ಯಗಳಲ್ಲಿ ಭಾರತೀಯರು ಆರಿಸಿಕೊಳ್ಳಬೇಕು.

"ನಾನು ಜರ್ಮನ್, ಜಪಾನೀಗಳ ಏಜಂಟ್ ಎಂದು ಪ್ರಚಾರ ಮಾಡುತ್ತಿದ್ದಾರೆ. ನನ್ನವರೊಂದಿಗೆ ನಾನು ಮಾತನಾಡುವಾಗ ನನ್ನ ವಿಷಯ ಹೇಳಿಕೊಳ್ಳಬೇಕೆ ? ಎಂದೆಂದಿಗೂ ನಾನು ಭಾರತಮಾತೆಯ ಸೇವಕ.

"ಅವರು ಹಿಂದೆ ಸರಿದಂತೆ ಭಾರತ ಸ್ವಾತಂತ್ರ ಬಳಿಸಾರುತ್ತಿದೆ. ೧೮೫೭ ರಲ್ಲಿ ಭಾರತದ ಪ್ರಥಮ ಸ್ವಾತಂತ್ರ ಸಂಗ್ರಾಮವು ನಡೆಯಿತು. ೧೯೪೩ ರಲ್ಲಿ ಕಡೆಯ ಸ್ವಾತಂತ್ರ ಸಂಗ್ರಾಮ ಆರಂಭವಾಗಿದೆ. ಸಂದೇಹಗಳನ್ನು ಬಿಡಿರಿ. ಭಾರತ ಸ್ವಾತಂತ್ರ ಸಿದ್ದಿ ಕಾಲವು ಪ್ರಾಪ್ತವಾಗಿದೆ.

ಈ ಭಾಷಣವು ಗಳಿತವಾಗಿ ಹೋಗುತ್ತಿದ್ದ ದೂರ ಪ್ರಾಚ್ಯ ನಿವಾಸೀ ಭಾರತೀಯರ ಹೃದಯಗಳಲ್ಲಿ ಭರವಸೆಯನ್ನು ತಂದಿತು. ಈ ಭರವಸೆಯೇ ಮೂರ್ತೀಭವಿಸಿ ಬಂದಿತೋ ಎಂಬಂತೆ-ಕೆಲದಿನಗಳ ನಂತರ ಶ್ರೀ ಸುಭಾಷ ಚಂದ್ರಬೋಸರು ಜರ್ಮನಿಯಿಂದ ದೂರ ಪ್ರಾಚ್ಯಕ್ಕೆ ಸಬ್‌ಮೆರೀನಲ್ಲಿ ಬಂದು ಬಿಟ್ಟರು.

ಟೋಕಿಯೋದಲ್ಲಿ ಇವರಿಗೆ ಅಭೂತ ಪೂರ್ವವಾದ ಸ್ವಾಗತವು ಕೊಡಲಾಯಿತು. ಆ ಕಾಲದಲ್ಲಿ ಅವರು ಈ ರೀತಿ ಪತ್ರಿಕೆಗಳಿದೆ ಎಂದು ಹೇಳಿಕೆ ಕೊಟ್ಟರು.

"ಕಳದ ಮಹಾ ಯುದ್ಧದಲ್ಲಿ ನಮ್ಮ ನಾಯಕರು ಬ್ರಿಟಿಷ್ ರಾಜನೀತಿಜ್ಞರಿಂದ ಮೋಸ ಮಾಡಲ್ಪಟ್ಟರು. ಈಗ ಮೋಸ ಹೋಗುವುದಿಲ್ಲವೆಂದು ನಮ್ಮ ನಾಯಕರು ನಿರ್ಧರ ಮಾಡಿದ್ದಾರೆ. ಇಪ್ಪತ್ತು ವರ್ಷಗಳಿಂದ ಸ್ವತಂತ್ರಕ್ಕಾಗಿ ನಮ್ಮ ಜನರು ಪರಿತಪಿಸಿದ್ದಾರೆ. ಪ್ರಯತ್ನ ಪಡಬೇಕಾದ ಸಂದರ್ಭವು ಈಗ ಬಂದಿದೆ. ಇನ್ನ ನೂರು ವರ್ಷಗಳಾದರೂ ಇಂತಹ ಸಂದರ್ಭ ಬರುವುದಿಲ್ಲ.

"ನಮ್ಮ ರಕ್ತದಿಂದ ನಾವೀಗ ಸ್ವಾತಂತ್ರಗಳಿಸಬೇಕಾಗಿದೆ. ಶಕ್ತಿಯಿಂದ ಅದನ್ನು ಉಳಿಸಿಕೊಳ್ಳಬೇಕಾಗಿದೆ. ಶತ್ರುವು ಖಡ್ಗ ಎಳೆದಿದ್ದಾನೆ. ಖಡ್ಗದಿಂದಲೇ ಈಗ ಎದುರಿಸಬೇಕು. ಸತ್ಯಾಗ್ರಹವು ಸಶಸ್ತ್ರ ಹೋರಾಟವಾಗಬೇಕು. ಈಗ ಅಗ್ನಿ ಪರೀಕ್ಷಾ ಸಮಯ.

ತಮ್ಮ ಮುಂದಿನ ಕೆಲಸಗಳಿಗೆ ದೂರ ಪ್ರಾಚ್ಯದ ಭಾರತೀಯರನ್ನು ಸಿದ್ಧಗೊಳಿಸಿದಂತಹ ಇನ್ನೂ ಅನೇಕ ಭಾಷಣಗಳನ್ನು ಶ್ರೀ ಸುಭಾಷ್ ಮಾಡಿದರು. ಸ್ಥಳ ಸಂಕೋಚದಿಂದ ಇಲ್ಲೀ ಅವುಗಳನ್ನು ಬರೆಯದಿದ್ದು ದಕ್ಕೆ ನಾವು ವಾಚಕರ ಕ್ಷಮ ಬೇಡುತ್ತೇವೆ.

## ಶ್ರೀ ಬೋಸ್‌ರ ಅಧಿಕಾರ ಸ್ವೀಕಾರ

ಇದಾದನಂತರ ೧೯೪೩ನೆಯ ಜೂನಲ್ಲಿ ಶ್ರೀ ಸುಭಾಷರು ಅಜಾದ್ ಹಿಂದ್ ಪೌಜ್ ಮತ್ತು ಭಾರತ ಸ್ವಾತಂತ್ರಸಮಾಜದಮೇಲೆ ಸಂಪೂರ್ಣಾಧಿ ಪತ್ಯವನ್ನು ಸ್ವೀಕರಿಸಿದರು. ಆಗ ಅವರು ಎರಡು ಭಾಷಣ ಮಾಡಿದರು. ಅದು ಈ ರೀತಿ ಇದ್ದಿತು :

ಭಾರತ ಸ್ವಾತಂತ್ರೋದ್ಯಮದ ಶ್ರೇಯಸ್ಸನ್ನಾಶಿಸಿ ನಾವು ಸಂಪೂರ್ಣ ಅಧಿಕಾರವನ್ನು ಸ್ವೀಕರಿಸಿರುವೆನು. ಭಾರತ ಸ್ವಾತಂತ್ರ ಸೈನ್ಯಾಧಿಪತ್ಯಕ್ಕಿಂತ ಸಂತೋಷಕರವಾದದ್ದು, ಹೆಮ್ಮೆಯುಂಟುಮಾಡುವಂಥಾದ್ದೂ ಬೇರೊಂದಿಲ್ಲ ವಷ್ಟೆ. ಇದು ಎಂತಹ ಕಷ್ಟವಾದ ಕೆಲಸವೋ ನನಗೆ ತಿಳಿದಿರುತ್ತದೆ. ಅದನ್ನು ನಿರ್ವಹಿಸುವ ಶಕ್ತಿಯನ್ನು ಕೊಡಬೇಕೆಂದು ಜಗದೀಶ್ವರನನ್ನು ಪ್ರಾರ್ಥನೆ ಮಾಡುವೆನು. ವಿವಿಧ ಮತಗಳಿಗೆ ಸೇರಿದಂತಹ ಕೋಟ್ಯಾಂತರ ಭಾರತೀ ಯರಿಗೆ ನಾನು ಸೇವಕನೆಂದು ಭಾವಿಸುತ್ತೇನೆ. ಪ್ರತಿ ಭಾರತೀಯನೂ ನನ್ನನ್ನು ವಿಶ್ವಾಸ ಮಾಡುವಂತೆ ನಡೆದುಕೊಳ್ಳುತ್ತೇನೆ. ಭಾರತ ಸ್ವಾತಂತ್ರ ಸಿದ್ಧಿಗಾಗಿ ಸ್ವತಂತ್ರ ಭಾರತಸೈನ್ಯ ಸ್ಥಾಪನೆಗಾಗಿ ದೀಕ್ಷೆಯಿಂದ ಕೆಲಸಮಾಡು ತ್ತೇನೆ. ಅಲ್ಲದೆ ಅಜಾದ್ ಪೌಜ್ ನಿರ್ವಹಿಸಬೇಕಾದ ಪ್ರಧಾನಪಾತ್ರ ವೊಂದಿದೆ. ಅದರ ನಿಮಿತ್ತ ನಾವು ಎಂದು ಸೈನ್ಯವಾಗಿ ಏರ್ಪಟ್ಟು "ಯಶೋವಾ ಮೃತ್ಯುರ್ವಾ" ಎಂದು ಮುಂದಕ್ಕೆ ಹೆಜ್ಜೆಹಾಕಬೇಕು.

"ನಮ್ಮ ಆಶಯವು ಪವಿತ್ರವಾದದ್ದು, ನ್ಯಾಯಸಮ್ಮತವಾದದ್ದು. ೪೦ ಕೋಟಿ ಮಂದಿ ಮಾನವಜಾತಿಯಲ್ಲಿ ಐದನೇ ಒಂದು ಭಾಗವಾಗಿರುವ ಭಾರತ ರಾಷ್ಟ್ರಕ್ಕೆ ಸ್ವತಂತ್ರವಾಗುವ ಹಕ್ಕಿಲ್ಲವೇ ಅದಕ್ಕಾಗಿ ಎಷ್ಟು ತ್ಯಾಗ

ಗಳನ್ನು ಮಾಡಬೇಕಾದರೂ ಭಾರತೀಯರಿಂದು ಸಿದ್ಧವಾಗಿರುತ್ತಾರೆ. ಸ್ನೇಹಿತರೇ, ಅಪೂರ್ವ ಶೌರ್ಯದಿಂದ ಅಚಂಚಲ ಚಪಲದಿಂದ ಮುಂದಕ್ಕೆ ಹೆಜ್ಜೆ ಹಾಕಿರಿ. ಭಾರತ ಸ್ವಾತಂತ್ರ್ಯವನ್ನು ನಿಮ್ಮದಾಗಿ ಮಾಡಿಕೊಳ್ಳಿರಿ. ವಿಜಯವು ನಿಮ್ಮದೇ! ದಿಲ್ಲಿ ಚಲೋ! ವೈಸರಾಯ್ ಭವನದ ಮೇಲೆ ತ್ರಿವರ್ಣ ಧ್ವಜವನ್ನು ಹಾರಿಸಿರಿ. ದಿಲ್ಲಿ ಕೋಟೆಯಲ್ಲಿ ಸೈನಿಕವಿನ್ಯಾಸವನ್ನು ಪ್ರದರ್ಶಿಸಿರಿ."

## ಪ್ರಥಮ ಕಾರ್ಯಕಲಾಪಗಳು

ಇಲ್ಲಿಂದ ಮುಂದೆ ದೂರ ಪ್ರಾಚ್ಯ ನಿವಾಸೀ ಭಾರತೀಯರು ಭರದಿಂದ ಸ್ವತಂತ್ರ ಸಂಗ್ರಾಮವನ್ನು ನಡೆಸಿದರು. ಈ ಸ್ವಾತಂತ್ರ್ಯೋದ್ಯಮ ಪ್ರಯತ್ನವು ಎಷ್ಟು ಭರದಿಂದ ಸಾಗಿತೆಂದು ನಾನು ಹೇಳುವುದಕ್ಕೆ ಆ ಕಾಲದಲ್ಲಿ ಶ್ರೀ ಸುಭಾಷ ಬಾಬುಗಳ ಕಾರ್ಯ ಕ್ರಮಗಳೂ ಮತ್ತು ಭಾಷಣಗಳೂ ಇವುಗಳನ್ನು ವಿವರಿಸುವುದಕ್ಕಿಂತ ಇದನ್ನು ಇನ್ನೂ ಚೆನ್ನಾಗಿ ಚಿತ್ರಿಸುವುದು ಸಾಧ್ಯವಿಲ್ಲ.

ನನ್ನ ದೇಶ ಬಾಂಧವರಲ್ಲಿ ಕೆಲವರು ಅಂತರಾಷ್ಟ್ರೀಯ ಒತ್ತಾಯದಿಂದ ಬ್ರಿಟಿಷರು ಭಾರತದಂತಹ ರಾಷ್ಟ್ರಗಳ ಸ್ವಾತಂತ್ರವನ್ನು ಗುರ್ತಿಸುವುದೆಂದು ಆಶೆ ಪಡುತ್ತಿದ್ದರು. ಆದರೆ ಅಂತಹ ಆಶಯಗಳು ಈಗ ನಿರರ್ಥಕವಾಗಿವೆ.

ನಾನು ಗಾಂಧೀಜೀಯವರನ್ನು ನೋಡಿದ ನಂತರ ೧೯೪೦ ರ ನಂತರ ಮಹಾತ್ಮಾ ಗಾಂಧೀಜೀಯವರು ಕಟ್ಟಕಡೆಗೆ ಸತ್ಯಾಗ್ರಹವನ್ನು ಆರಂಭ ಮಾಡಿದರೆಂಬುದು ನಿಮಗೆ ತಿಳಿದೇ ಇರುತ್ತದೆ. ಆದರೆ ಭಾರತೀಯರ ಇಷ್ಟಾರ್ಥ ಸಿದ್ಧಿಯಾಗಬೇಕಾದರೆ ಬೃಹದ್ ರೂಪದಿಂದ ಕ್ರಾಂತಿ ನಿರ್ಮಾಣ ಮಾಡಬೇಕೆಂದು ನಾನು ಭಾವನೆ ಮಾಡುತ್ತಿದ್ದೆನು. ಅಂದಿಂದು ಸಾರ್ಥಕವಾಗಿದೆ. ಪರಿಸ್ಥಿತಿಗಳು ವ್ಯಕ್ತವಾಗಿಯೇ ಇವೆ. ನಮಗೆ ವಿಜಯವು ಸಿದ್ಧ.

ನಮ್ಮ ಶತ್ರುಗಳ ಅಧೀನದಲ್ಲಿದ್ದಂತಹ ಭಾರತೀಯರು ಸುಸಂಘಟಿತ ರಾಗಿರುವರು. ಭಾರತದೊಳಗೆ ನಡೆಯುತ್ತಿರುವುದನ್ನು ಗಮನಿಸುತ್ತಾ ಅಂತ ರಾಷ್ಟ್ರೀಯ ಪರಿಸ್ಥಿತಿಗಳಿಗನುಗುಣವಾಗಿ ನಡೆದುಕೊಳ್ಳುತ್ತಿದಾರೆ. ಭಾರತ ಸ್ವಾತಂತ್ರಸಿದ್ಧಿಗಾಗಿ ಸರ್ವಪ್ರಯತ್ನವನ್ನೂ ಮಾಡುತ್ತಿದ್ದಾರೆ.

ಸ್ನೇಹಿತರೆ, ನಾನೂ ನನ್ನಂತಹವರ ಸಹಾಯಬೇಕಾದಾಗ ಜೊತೆಜೊತೆ ಯಾಗಿ ಬಂದು ನಿಂತು ನಿಮ್ಮೊಡನೆ ಸೇರಿ ಹೋರಾಡುತ್ತೇವೆಂದು ನಿಮಗೆ ನಾನು ಹೇಳುತ್ತಲೇ ಇದ್ದೆ. ಆ ಪ್ರತಿಜ್ಞೆಯು ಈಗ ನೆರವೇರಿಸಲ್ಪಟ್ಟದೆ.

ಭಾರತವು ಸ್ವತಂತ್ರವಾಗುತ್ತದೆ. ಅತಿ ಶೀಘ್ರವಾಗಿ ಆಗುತ್ತದೆ. ಸ್ವತಂತ್ರ ಭಾರತವು ಕಾರಾಗೃಹಗಳ ಬಾಗಿಲುಗಳನ್ನು ತೆಗೆಯುತ್ತೇವೆ. ಅಲ್ಲಿ ರುವ ಭಾರತದ ಸುಪುತ್ರರು ಕಾರಾಗೃಹದ ಕತ್ತಲೆಯಿಂದ ಹೊರಗೆ ಬಂದು ಸ್ವಾತಂತ್ರ ಸೂರ್ಯ ಪ್ರಕಾಶವನ್ನು ನೋಡಲಿ!

ಶ್ರೀ ಸುಭಾಷ ಬಾಬುಗಳು ಪೂರ್ವ ಏಷ್ಯಾದ ಭಾರತೀಯರು ತಮಗೆ ಸಹಾಯ ಮಾಡಬೇಕೆಂದು ಅವರನ್ನು ಪ್ರಾರ್ಥಿಸಿದರು. ಆಗವರು ಹೇಳಿದ್ದೇ ನೆಂದರೆ—

ಭಾರತ ರಾಷ್ಟ್ರವನ್ನು ಸ್ವತಂತ್ರವನ್ನಾಗಿ ಮಾಡುವ ಕೆಲಸ ನಮ್ಮದೇ ಇದರ ಜವಾಬ್ದಾರೀ ಇನ್ನಾರ ಮೇಲೆಯೂ ಹಾಕಕೂಡದು. ಅದು ನಮ್ಮ ರಾಷ್ಟ್ರ ಗೌರವಕ್ಕೆ ವಿರೋಧ.

ಶತ್ರುವು ಕಠೋರನಾಗಿದ್ದಾನೆ. ಧೃತಿಗೆಟ್ಟುವಿವೇಚನೆಯಿಲ್ಲ ದವನಾಗಿ ದ್ದಾನೆ. ಸಶಸ್ತ್ರನಾಗಿದ್ದಾನೆ. ಕಾನೂನು ಭಂಗ, ಮುಷ್ಕರ, ಭಯಸೂಚ ಕ ಕ್ರಾಂತಿ ಇವು ಈಗೆ ಫಲವಿಲ್ಲ. ಶತ್ರುವನ್ನೀಗ ಜಯಿಸಬೇಕಾದರೆ ಆತನ ಮಾರ್ಗವನ್ನೇ ಅನುಸರಿಸಬೇಕಾಗಿದೆ.

ಪೂರ್ವ ಏಷ್ಯಾದ ಜನ ಬೆಂಬಲದಿಂದ ಭಾರತದಿಂದ ಬ್ರಿಟಿಷರನ್ನು ತಳ್ಳಿಹಾಕಿ ಬಿಡುವಂತಹ ಬೃಹದ್ ಶಕ್ತಿಯನ್ನು ನಿರ್ಮಾಣ ಮಾಡುವ ಭರ ವಸೆ ನನಗಿದೆ. ಕಾಲವು ಬಂದಿದೆ. ಭಾರತ ಸ್ವಾತಂತ್ರಾಪೇಕ್ಷಿಗಳ ರಕ್ತ ಪ್ರವಾಹದಿಂದ ಭಾರತ ಸ್ವತಂತ್ರವಾಗುತ್ತದೆ.

## ಮೋಸ ಮಾಡಬಲ್ಲರೆ?

ಮತ್ತೊಂದು ಭಾಷಣದಲ್ಲಿ ಹೇಳಿದರು. ಜಪಾನರಿಂದ ಮೋಸಹೋಗುವಷ್ಟು ಬುದ್ಧಿಯೂ ಸಹ ನನಗಿಲ್ಲವೆಂದು ಭಾವನೆ ಮಾಡುತ್ತಿರೋ? ನನ್ನ ಮಾತನ್ನು ನಂಬಿರಿ. ನಮ್ಮನ್ನು ಜಪಾನರು ಮೋಸಮಾಡಲಾರರೆಂದು ನಾನು ನಮಗೆ ಭರವಸೆ ಮಾಡುತ್ತೇನೆ. ನಾವು ಸರಿಯಾದ ರೀತಿಯಿಂದ ಸಂಘಟಿತರಾಗದಿದ್ದರೆ ಭಾರತ ಸ್ವಾತಂತ್ರ ಸಿದ್ಧಿಗಾಗಿ ಬಲವಾದ ಭಾರತೀಯ ಸೈನ್ಯವನ್ನು ನಾವು ಕಟ್ಟದಿದ್ದರೆ ಆಗ ಅವರು ನಮಗೆ ಮೋಸ ಮಾಡಬಲ್ಲರು. ನಾವು ಮೇಲ್ಏಳಬೇಕು. ಸಜೀವರಾಗಬೇಕು. ಎಚ್ಚರವಾಗಿರಬೇಕು. ನಮ್ಮ ಶತ್ರುಗಳಾದ ಬ್ರಿಟಿಷ್ ಸಾಮ್ರಾಜ್ಯಷಾಹಿಯ ಮೇಲೆ ಮಾತ್ರವಲ್ಲ. ಸಾಮ್ರಾಜ್ಯಾಭಿಲಾಷಿಗಳಾದ ಜಪಾನರ ವಿಷಯದಲ್ಲಿಯೂ ಎಚ್ಚರದಿಂದರಬೇಕು. ನಮ್ಮಲ್ಲಿರುವ ಆ ಮನೋಭಾವವನ್ನು ಒಳಗೊಂಡ ಭಾರತೀಯರ ವಿಷಯದಲ್ಲಿಯೂ ಎಚ್ಚರದಿಂದಿರಬೇಕು. ಶಿಸ್ತಿನಿಂದ ನಾವೆಲ್ಲ ವಿಧವಾದ ತ್ಯಾಗಕ್ಕೂ ಸಿದ್ಧರಿರಬೇಕು. ಪ್ರತಿ ಒಬ್ಬ ವ್ಯಕ್ತಿಯೂ ಕರ್ತವ್ಯಕ್ಕೆ ಸಿದ್ಧನಾಗಲಿ. ನಾನು ನಿಮಗೆ ಕೆಲಸವನ್ನು ತರುತ್ತೇನೆ. ಕರ್ತವ್ಯ-ಕರ್ತವ್ಯ-ಕರ್ತವ್ಯ-ಅದೇ ನಿಮ್ಮ ಮತ್ತು ನನ್ನ ಜವಾಬ್ದಾರಿ.

## ಸಾವಿರ ಝಾನ್ಸಿ ರಾಣಿಗಳು ಬೇಕು

ರಾಣೀ ಝಾನ್ಸೀ ದಳ ಮತ್ತು ರೆಡ್‌ಕ್ರಾಸ್ ಯೂನಿಟ್ ಆರಂಭಿಸಿದರು. ಗುಜರಾತಿ ಮಹಿಳೆಯೊಬ್ಬರು ಬಂದು ನೇತಾಜಿಗೆ ತನ್ನ ಆಭರಣಗಳೆಲ್ಲವನ್ನೂ ಕೊಟ್ಟಳು. ಬಳೆಗಳು, ಉಂಗುರಗಳು, ಹಾರಗಳು ಎಲ್ಲವನ್ನೂ ಕೊಟ್ಟಳು. ಆಗ ನೇತಾಜಿ ಮಾತನಾಡಿದರು.

ಸಹೋದರಿಯರೇ,

ಭಾರತ ಸ್ವಾತಂತ್ರ ಸಂಗ್ರಾಮದಲ್ಲಿ ಮಹಿಳೆಯರು ಮಾಡಿದ ಕೆಲಸಗಳನ್ನು ನೀವು ಬಲ್ಲಿರಿ. ಮಹಾತ್ಮಾಜೀ ನಾಯಕತ್ವದಲ್ಲಿ ಭಾರತ ಕಾಂಗ್ರೆಸ್ ಪುನರುದ್ಧಾರವಾದ ಕಾಲದಿಂದ ಅವರು ಮಾಡಿರುವ ತ್ಯಾಗವನ್ನು ನೀವು ಬಲ್ಲಿರಿ. ಅಷ್ಟೇ ಅಲ್ಲ. ಗುಪ್ತ ಕ್ರಾಂತಿಕಾರ್ಯ ದಳದಲ್ಲಿ ಅವರು ವಹಿಸಿದ ಪಾತ್ರವನ್ನು ಬಲ್ಲಿರಿ.

ಸ್ತ್ರೀಯರು ಪುರುಷರೊಂದಿಗೆ ಹೆಗಲುಕೊಟ್ಟು ಜವಾಬ್ದಾರಿ ವಹಿಸ ದಂತಹ ಯಾವ ಭಾರತ ಸ್ವಾತಂತ್ರ ಸಂಗ್ರಾಮವೂ ಇಲ್ಲ.

ಈ ದಿನ ನಾನು ನಿಮ್ಮಲ್ಲಿ ಭರವಸೆಯುಳ್ಳವನಾದ್ದರೆ ಅದಕ್ಕೆ ಕಾರಣವು ನಾನು ನಮ್ಮ ಮಹಿಳೆಯರು ಏನು ಮಾಡಬಲ್ಲರೆಂದು ಚೆನ್ನಾಗಿ ತಿಳಿದುಕೊಂಡಿರುವುದೇ! ಅದರಿಂದ ನಾನು ಉತ್ಪ್ರೇಕ್ಷೆ ಇಲ್ಲದೇ ಹೇಳುತ್ತೇನೆ. ನಮ್ಮ ಮಹಿಳೆಯರು ತಡೆಯಲಾರದ ತೊಂದರೆ, ಮಾಡಲಾರದ ತ್ಯಾಗಗಳೇ ಇಲ್ಲ.

ಪ್ರತಿಯೊಂದು ಸಾಮ್ರಾಜ್ಯಕ್ಕೂ ಅಭ್ಯುದಯ ಅವನತಿಗಳಿವೆ ಎಂದು ಚರಿತ್ರೆಯು ನಿಮಗೆ ತಿಳಿಸುತ್ತದೆ. ಬ್ರಿಟಿಷ ಸಾಮ್ರಾಜ್ಯವು ಮಾಯವಾಗುವ ಕಾಲ ಬಂದಿದೆ. ಪ್ರಪಂಚದ ಈ ಭಾಗದಿಂದ ಅದು ಯಾವ ರೀತಿ ಮಾಯವಾಗಿದೆ ಎಂಬುದನ್ನು ನಾವು ನೋಡಿರುತ್ತೇವೆ. ಹಾಗೆಯೇ ಪ್ರಪಂಚದ ಮತ್ತೊಂದು ಭಾಗವಾದ ಭಾರತದಿಂದಲೂ ಮರೆಯಾಗುತ್ತದೆ.

ಇಲ್ಲಿಯಾಗಲೀ-ಇನ್ನೆಲ್ಲಿಯಾಗಲೀ ಯಾರಾದರೂ ರೈಫಲ್ ಹಿಡಿಯುವುದು ಹೆಂಗುಸಿಗೆ ತಕ್ಕ ಕೆಲಸವಲ್ಲವೆಂದು ಹೇಳುವುದಾದರೆ-ನಮ್ಮ ಚರಿತ್ರೆಯ ಹಾಳೆಗಳನ್ನು ಮೊಗುಚಿರಿ ಎಂದು ಹೇಳುತ್ತೇನೆ. ಭಾರತದ ಮೊದಲನೆಯ ಸ್ವಾತಂತ್ರ ಸಂಗ್ರಾಮವಾದ ೧೮೫೭ನೇ ವರ್ಷದ ಕ್ರಾಂತಿಯಲ್ಲಿ ಝಾನ್ಸೀ ರಾಣಿ ಏನು ಮಾಡಿದಳು? ಆಶ್ವಾರೋಹಿಯಾಗಿ ಖಡ್ಗವನ್ನೆಳೆದು ಗಂಡಸರನ್ನು ಯುದ್ಧರಂಗಕ್ಕೆ ಕೊಂಡು ಹೋದ ರಾಣಿ ಈಕೆ. ನಿಮ್ಮ ದುರದೃಷ್ಟದಿಂದ ಆಕೆ ಬಿದ್ದಳು. ಪರಾಜಯ ಹೊಂದಿದಳು. ಭಾರತ ಪರಾಜಯ ಹೊಂದಿತು. ೧೮೫೭ರಲ್ಲಿ ಝಾನ್ಸೀ ಲಕ್ಷ್ಮೀಯು ಆರಂಭಿಸಿದ ಕಾರ್ಯವನ್ನು ನಾವೀಗ ಮುಗಿಸಬೇಕಾಗಿರುತ್ತದೆ.

ಈ ಕಡೆಯ ಸ್ವಾತಂತ್ರ ಸಂಗ್ರಾಮದಲ್ಲಿ ನಮಗೆ ಒಬ್ಬ ಝಾನ್ಸೀ ರಾಣಿಯು ಸಾಲದು. ಸಹಸ್ರ ಸಹಸ್ರ ಝಾನ್ಸೀ ರಾಣಿಯರು ಬೇಕಾಗಿದ್ದಾರೆ. ನೀವು ಎಷ್ಟು ರೈಫಲ್‌ಗಳನ್ನು ಕೊಂಡುಹೋಗುವಿರಿ—ಎಷ್ಟು ಗುಂಡುಗಳನ್ನು ಹಾರಿಸುವಿರಿ ಎಂಬುದು ಮುಖ್ಯವಲ್ಲ. ನೀವು ತೋರುವ ಧೈರ್ಯಯುತವಾದ ಆದರ್ಶದಿಂದ ಉತ್ಪನ್ನವಾಗುವ ನೈತಿಕಬಲವು ಬಹಳ ಮುಖ್ಯ.

# ತಂದೆಯೇ ನಮ್ಮನ್ನು ಹರಸು

ನೇತಾಜೀ ಮಹಾತ್ಮರನ್ನು ಉದ್ದೇಶವಾಡಿ ರೇಡಿಯೋದಲ್ಲಿ ಮಾತನಾಡಿದರು. ಗಂಭೀರವಾದ ಆ ಧ್ವನಿಯು ಈ ರೀತಿಯಾಗಿತ್ತು.

ಮಹಾತ್ಮಜೀ,

ಬ್ರಿಟಿಷ್ ಕಾರಾಗಾರದಲ್ಲಿ ಕಸ್ತೂರ್ ಬಾ ಮರಣಹೊಂದಿದುದು ನಿಮ್ಮ ದೇಹಸ್ಥಿತಿಯ ವಿಷಯದಲ್ಲಿ ಬಹಳ ಆಸಕ್ತಿಯನ್ನುಂಟುಮಾಡಿರುತ್ತದೆ. ಸ್ವಾತಂತ್ರ ಸಾಧನೆಯಲ್ಲಿರುವ ಅಭಿಪ್ರಾಯ ಭೇದಗಳು ಮನೆಯ ಜಗಳದಂತೆ. ೧೯೨೯ನೇ ಡಿಸೆಂಬರದಲ್ಲಿ ನೀವು ಸ್ವಾತಂತ್ರ ತೀರ್ಮಾನವನ್ನು ಘೋಷಣವಾಡಿದಂದಿನಿಂದ ಪ್ರತಿ ಕಾಂಗ್ರೆಸ್‌ವಾದಿಗೂ ಸ್ವಾತಂತ್ರವೊಂದೇ ಗುರಿ. ಭಾರತದ ನವಚೇತನಕ್ಕೆ ನೀವೇ ಕಾರಣ. ೧೯೪೨ನೇ ಆಗಸ್ಟ್‌ನ ಕ್ವಿಟ್ ಇಂಡಿಯಾ ತೀರ್ಮಾನವು ಭಾರತದ ಹೊರಗಿರುವ ಭಾರತೀಯರ ಮತ್ತು ಭಾರತ ಸ್ವಾತಂತ್ರಾಪೇಕ್ಷಿಗಳ ಉತ್ಸಾಹವನ್ನು ನೂರ್ಮಡಿ ಹೆಚ್ಚಿಸಿದೆ.

ಬ್ರಿಟಿಷರನ್ನು ಬ್ರಿಟಿಷ್ ಸರ್ಕಾರವನ್ನು ಬೇರೆ ಬೇರೆ ಎಂದು ಭಾವಿಸುವುದು ತಪ್ಪು. ಯಾಕೆಂದರೆ - ಭಾರತ ಸ್ವಾತಂತ್ರಾಪೇಕ್ಷಿಗಳಾದ ಬ್ರಿಟಿಷರು ಅಮೇರಿಕಾದಲ್ಲಿರುವವರಂತೆಯೇ ಬಹಳ ಕಡಮೆ. ಇವರು ಬಹಳ ಅಲ್ಪ ಸಂಖ್ಯಾತರು. ಭಾರತಕ್ಕೆ ಸಂಬಂಧಿಸಿದಂತೆ ಬ್ರಿಟಿಷರೂ ಬ್ರಿಟಿಷ್ ಸರ್ಕಾರವೂ ಒಂದೇ. ಅಮೇರಿಕಾದ ವಿಷಯವನ್ನು ಹೇಳಬೇಕೆಂದರೆ ಅದಕ್ಕೆ ಪ್ರಪಂಚಾಡಳಿತದ ಆಸೆಯಿದೆ. ಇವರುಗಳು ಈ ಕಾಲವನ್ನು ಅಮೇರಿಕೆಯ ಯುಗವೆನ್ನುತ್ತಾರೆ. ಸಂಯುಕ್ತ ಸಂಸ್ಥಾನಗಳ ೪೮ ರಾಜ್ಯಗಳ ಜೊತೆಗೆ ಬ್ರಿಟನ್ನನ್ನು ೪೯ನೇ ರಾಜ್ಯವೆನ್ನುತ್ತಾರೆ.

ಮಹಾತ್ಮಾಜೀ, ನಾನು ಬಹಳ ಆಲೋಚಿಸಿರುತ್ತೇನೆ. ಭಾರತದಲ್ಲಿಯೇ ಇದ್ದು ಸ್ವಾತಂತ್ರ ಗಳಿಸಲು ಸಾಧ್ಯವಾಗುವುದಾದರೆ ಅಲ್ಲಿಯೇ ಇರುತ್ತಿದ್ದೆ.

ಮಹಾತ್ಮಾಜೀ, ನಮ್ಮ ರಾಷ್ಟ್ರ ಜೀವನದ ತಂದೆಯೇ! ಭಾರತ ಸ್ವಾತಂತ್ರದ ಈ ಪವಿತ್ರ ಯುದ್ಧದಲ್ಲಿ ನಮ್ಮನ್ನು ಹರಸು!

# ಮೊದಲನೇ ದಂಡಯಾತ್ರೆ

ಅಜಾದ್ ಹಿಂದ್ ಫೌಜ್‌ನ ದಂಡಯಾತ್ರೆಯು ಸಿಂಗಪುರದಿಂದ ಹಿಡಿದು ಇಂಪಾಲ್‌ವರೆಗೆ ನಡೆಯಿತು. ಪರ್ವತಗಳನ್ನೂ ನದಿಗಳನ್ನೂ ವನಗಳನ್ನೂ ಸಮುದ್ರಗಳನ್ನೂ ದಾಟಿಕೊಂಡು ಈ ಅಜಾದ್ ಫೌಜನ ವೀರರು ಮುಂದೆ ಮುಂದೆ ನಡೆದರು. ಸಹಸ್ರ ಮೈಲಿಗಳ ದೂರವನ್ನಿವರು ಕಾಲು ನಡಿಗೆಯಲ್ಲಿಯೇ ಕಳೆದರೆಂದರೆ ಇವರ ಉತ್ಸಾಹವು ಅಪರಿಮಿತವಾಗಿದ್ದಿತೆಂದು ಪ್ರತ್ಯೇಕವಾಗಿ ಹೇಳಬೇಕಾದ ಆವಶ್ಯಕತೆಯಿಲ್ಲ. ನಡೆಯಿರಿ. ಮುಂದೆ ನಡೆಯಿರಿ, ದಿಲ್ಲಿಯ ಕೋಟೆಯನ್ನು ಸೇರಿರಿ. ಇಲ್ಲವೇ ನಿಮ್ಮ ಹಿಂದೆ ನಡೆದು ಬರುತ್ತಿರುವವರನ್ನು ಯಾವ ದಾರಿಯು ಭಾರತಕ್ಕೆ ಕೊಂಡೊಯ್ಯುವುದೋ ಅದನ್ನು ಮುತ್ತಿಟ್ಟು ಪ್ರಾಣ ಬಿಡಿರಿ—ಎಂದು ಗುಡುಗಿನ ಶಬ್ದದಂತೆ ಕೇಳಿ ಬರುತ್ತಿದ್ದ ನೇತಾಜಿಯ ಕೂಗನ್ನು ಕೇಳುತ್ತಾ ಅವರು ಮುಂದುವರಿದರು.

ಅವರ ರಣಮುಖ ಪ್ರಯಾಣ ಅವರು ಯುದ್ಧಮಾಡಿದ ರೀತಿಯನ್ನು ನೋಡಿರಿ.

ಭಾರತದ ಮೇಲೆ ಯಾವ ದಳಗಳು ಹೋಗಿ ಯುದ್ಧಮಾಡಬೇಕೆಂದುದು ಬಹಳ ಮುಖ್ಯವಾಗಿದ್ದಿತು. ಭಾರತದ ಸೇನಾಧಿಕಾರಿಗಳ ಅಧೀನವಲ್ಲಿ, ಭಾರತೀಯ ಸೇನೆಗಳೇ ಹೋಗಿ ಯುದ್ಧಮಾಡಬೇಕೆಂದೂ—ಈ ಯುದ್ಧವು ಭಾರತ ಸ್ವಾತಂತ್ರ್ಯಕ್ಕಾಗಿಯೇ ನಡೆಯಬೇಕೆಂದೂ ಮೊದಲು ಇತ್ಯರ್ಥವಾಗಬೇಕಾಗಿದ್ದಿತು. ಇದಿಷ್ಟೂ ಆದನಂತರವೇ ನೇತಾಜಿ ಅಜಾದ್ ಫೌಜಿನ ದಳಗಳು ರಣಮುಖಕ್ಕೆ ಹೋಗಲು ಒಪ್ಪಿದುದು. ಹಿಂದೆ ನೇತಾಜಿ ಅಧಿಕಾರ ಸ್ವೀಕಾರವನ್ನು ಮಾಡುವ ಮೊದಲು ಜಪಾನರಿಂದ ಅಜಾದ್ ಸೇನೆಗೆ ಕರೆ ಬಂದಿತ್ತು. ಆದರೆ ಫೌಜ್ ತನ್ನ ಸಂಬಂಧವಾದ ವಿಷಯಗಳು ಇತ್ಯರ್ಥವಾಗುವ ಮೊದಲು ಆ ರೀತಿಯಾಗಿ ಹೋಗಲು ನಿರಾಕರಿಸಿತ್ತು. ಇಂತಹ ನಿರಾಕರಣೆ ಎಷ್ಟೋ ಬಾರಿಯಾಗಿದ್ದಿತು.

ಇದೆಲ್ಲವನ್ನೂ ಸರಿಪಡಿಸಿಕೊಂಡ ನಂತರವೇ ಅಜಾದ್ ಫೌಜ್ ರಣಮುಖಕ್ಕೆ ಹೋಗಲು ಬೋಸರು ಸಮ್ಮತಿಸಿದರು.

ಇಂಫಾಲ್ ದಂಡಯಾತ್ರೆ ನಡೆಯಬೇಕೆಂಬುದನ್ನು ಜಪಾನರು ೧೯೪೪ನೇ ಜನವರಿಯಲ್ಲಿ ನಿರ್ಧರಿಸಿದರು. ಈ ದಂಡಯಾತ್ರೆಯು ನಡೆದುದು ಅದೇ ವರ್ಷ ಮಾರ್ಚ್‌ನಲ್ಲಿ. ಈ ದಂಡಯಾತ್ರೆಯು ಆರಂಭವಾಗುವ ಮೊದಲು ಅಜಾದ್ ಫೌಜಿನವರಿಗೂ ಮತ್ತು ಜಪಾನೀ ಸೇನಾಧಿಕಾರಿಗಳಿಗೂ ಒಂದು ಒಪ್ಪಂದವಾಯಿತು. ಇವರ ಕಾರ್ಯಕಲಾಪಗಳನ್ನು ಒಂದು ಸಂಯುಕ್ತ ಸಮಿತಿಯು ನೋಡಿಕೊಳ್ಳುತ್ತಲಿದ್ದಿತು. ಅಜಾದ್ ಫೌಜ್ ಸ್ವತಂತ್ರವಾದ ಸೇನೆಯಾಗಿ ಜಪಾನರೊಡನೆ ಕಲೆತು ಕೆಲಸಮಾಡುತ್ತಿದ್ದಿತೇ ಹೊರತು ಅದು ಜಪಾನಿಗಳ ಅಧೀನವಾಗಿ ಇರಲಿಲ್ಲ.

ಈ ಯುದ್ಧಾರಂಭ ಕಾಲದಲ್ಲಿ ಸಾರ್ವತ್ರಿಕ ತಿಳುವಳಿಕೆಗಾಗಿ ಎರಡು ಘೋಷಣೆಗಳು ಮಾಡಲ್ಪಟ್ಟವು. ಒಂದು ಬೋಸ್‌ರಿಂದ, ಮತ್ತೊಂದು ಜಪಾನ್ ಸೈನ್ಯಾಧಿಕಾರಿಯಿಂದ. ಇಂಫಾಲ್‌ನಲ್ಲಿ ಆರಂಭವಾಗುವ ಯುದ್ಧವು ಭಾರತ ಸ್ವಾತಂತ್ರಕ್ಕಾಗಿ ಎಂದೂ-ಈ ವಿಜಯದ ಫಲವು ಅಜಾದ್ ಫೌಜ್‌ಗೆ ಕೊಡಲ್ಪಡುವುದೆಂದೂ ಬೋಸ್‌ರ ಘೋಷಣ ಪತ್ರದಲ್ಲಿ ಇದ್ದಿತು. ಜಪಾನ್ ಸೈನ್ಯಾಧಿಕಾರಿಯು ಘೋಷಿಸಿದ್ದರಲ್ಲಿ ಜಪಾನ್‌ರು ಯಾರೂ ಭಾರತೀಯರ ಮೇಲೆ ಯುದ್ಧ ಮಾಡಬಾರದೆಂದೂ ಬ್ರಿಟಿಷರ ಮೇಲೆ ಮಾತ್ರ ಮಾಡಬೇಕೆಂದು ಕೈವಶವಾದ ಪದಾರ್ಥ ಪ್ರದೇಶಗಳನ್ನೂ ಸ್ವತಂತ್ರ ಭಾರತ ಸರ್ಕಾರಕ್ಕೆ ಒಪ್ಪಿಸಬೇಕೆಂದೂ ಇದ್ದಿತು.

ಸಿಂಗಪುರದಿಂದ ಅಜಾದ್ ಫೌಜ್‌ನ ಸೇನೆಗಳು ಬಂದವು. ಅನಂತರ ಅನೇಕ ಕಡೆಗಳಿಂದ ಬಂದವು. ಮೊದಲು ದಂಡಯಾತ್ರೆಯ ಕಾಲದಲ್ಲಿ ಹತ್ತು ಸಾವಿರ ಸಂಖ್ಯೆಯಿದ್ದದ್ದು ಬರುತ್ತ ಬರುತ್ತ ಹೆಚ್ಚಾಯಿತು.

ಅಜಾದ್ ಫೌಜ್‌ನ ಮೊದಲನೆಯ ದಳವು ರಂಗೂನಿಗೆ ೧೯೪೪ನೇ ಜನವರಿಯಲ್ಲಿ ಬಂದಿತು. ಈ ಪ್ರಥಮ ಗೋರಿಲ್ಲಾ ದಳಕ್ಕೆ ಷಾ ನವಾಜರು ಅಧಿಪತಿಗಳಾಗಿದ್ದರು.

ಈ ದಂಡಯಾತ್ರೆ ಅಷ್ಟು ಫಲಪ್ರದವಾಗಲಿಲ್ಲ. ಆ ಕಾಲದಲ್ಲಿ ಷಾ ನವಾಜರು ಬರೆದರೆಂದು ಹೇಳಲಾಗಿರುವಂತಹ ಡೈರಿಗಳಿಂದ ಈ ಕೆಳಗೆ ಕಂಡ ವಿಷಯಗಳು ತಿಳಿದು ಬರುತ್ತದೆ.

ಷಾ ನವಾಜರು ಜಪಾನ್ ದಂಡಾಧಿಪತಿಯನ್ನು ನೋಡಿದ್ದರು. ಭಾರತದ ಕಡೆ ನುಗ್ಗುವ ವಿಷಯವಾಗಿ ಆತನೊಂದಿಗೆ ಮಾತನಾಡಿದರು. ಅನಂತರ ಉತ್ತರ ಬರ್ಮಾದ ಜಪಾನ್ ಸೈನ್ಯಾಧಿಕಾರಿಯಾಗಿದ್ದ ಜನರಲ್ ಮೋಚಿಗುಚಿಯನ್ನು ಕಂಡರು. ಆತನು ಬಹಳ ವಿಶ್ವಾಸದಿಂದ ಮಾತನಾಡಿದನು. ಆತನು ಅಜಾದ್ ಫೌಜ್‌ಗೆ ಸಹಾಯ ಮಾಡುವುದಾಗಿ ಭರವಸೆಯಿತ್ತನು.

ಕೆನಡೀ ಪೀಕ್‌ಗೆ ಹೋಗಿ ಬಂದ ನಂತರ ಆತನ ಮನಸ್ಸು ಕೆಟ್ಟು ಹೋಯಿತು. ಜಪಾನರು ತಮಗೆ ಸರಿಯಾಗಿ ಸಹಾಯ ಮಾಡುತ್ತಿಲ್ಲವೆಂದು ಅವರು ಬಗೆದರು.

ಒಂದು ಬಾರಿ ಸೈನಿಕರಿಗೆ ಆಹಾರವಿಲ್ಲದೇ ಹೋಯಿತು. ಜಪಾನರ ಕಿಕಾನ್ ಕ್ಯಾಂಪ್‌ಗೆ ಹೇಳಿ ಕಳಿಸಿದರು. ಅವರು ಸರಿಯಾಗಿ ಉತ್ತರ ಕೊಡಲಿಲ್ಲ. ಸೈನ್ಯದಲ್ಲಿ ಬಹಳ ಕಷ್ಟವಾಯಿತು. ಜಪಾನ್ ಸೈನ್ಯಾಧಿಕಾರಿಗಳೊಡನೆ ಮಾತನಾಡಲು ಅವರಾವ ಬಗೆಯ ಸಹಾಯವನ್ನು ಮಾಡುವುದಿಲ್ಲವೆಂದು ಹೇಳಿದರು. ಅನ್ನಾತುರರಾದವರು ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಕಠಿನಾತ್ಮನಾದ ಆ ಜಪಾನೀ ಅಧಿಕಾರಿ ಹೇಳಿದನು.

## ನೇತಾಜಿಯ ಪ್ರಕಟಣೆ

ನೇತಾಜಿಯವರು ಈ ಮೊದಲನೆಯ ಪುರೋಗಮನದ ವಿಷಯವನ್ನು ಹೇಳಿದ್ದನ್ನು ಇಲ್ಲಿ ಬರೆಯುತ್ತೇವೆ. ಅದು ಪರಿಸ್ಥಿತಿಗಳನ್ನು ಚೆನ್ನಾಗಿ ವಿವರಿಸುತ್ತದೆ.

ಈ ಕಾಲದಲ್ಲಿ ಒಂದು ದಿನ ಪ್ರಧಾನ ಕಚೇರಿಯಲ್ಲಿ ಸಹೋದ್ಯೋಗಿಗಳಿಗೆ ನೇತಾಜಿಯವರು ಈ ವಿಧವಾಗಿ ಪರಿಸ್ಥಿತಿಗಳನ್ನು ವಿವರಿಸಿದರು.

ನಾವು ಕಾರ್ಯಾಚರಣೆಯನ್ನು ಬಹಳ ನಿಧಾನವಾಗಿ ಆರಂಭಮಾಡಿದೆವು. ಮುಂಗಾರು ಮಳೆಯು ನಮಗೆ ಕಷ್ಟದಂತೆ ಪ್ರಾಪ್ತವಾಗಿರುತ್ತದೆ. ರಸ್ತೆಗಳು ನೀರಿನಿಂದ ಕೂಡಿವೆ—ನದಿಗಳ ಮುಖಾಂತರ ಪ್ರಯಾಣ ಮಾಡು

ವುದುದು ಸಾಧ್ಯವಾಗಿರುತ್ತದೆ. ಶತ್ರುವಿಗೆ ಉತ್ತಮವಾದ ರಸ್ತೆಗಳಿವೆ. ನಾವು ಮಳೆಗಳು ಆರಂಭವಾಗುವ ಮೊದಲು ಇಂಫಾಲ್ ಹಿಡಿಯಬೇಕಾಗಿತ್ತು. ಇಂಪಾಲ್ ಹಿಡಿಯುವುದಕ್ಕೆ ನಮಗೆರಡು ತೊಂದರೆಗಳಿದ್ದವು. ಒಂದು ವಿಮಾನ ಬಲವಿರಲಿಲ್ಲ. ಎರಡನೆಯದು ಕಡೆಯವರೆವಿಗೂ ಇಂಪಾಲ್‌ನಲ್ಲಿ ಕದನ ಮಾಡಲೇಬೇಕೆಂದು ನಮ್ಮ ಶತ್ರುಗಳು ಆಜ್ಞೆ ಮಾಡಿದರು. ಜನವರಿಯಲ್ಲಿ ನಾವೀ ದಂಡಯಾತ್ರೆ ಮಾಡಿದ್ದರೆ ಜಯಿಸುತ್ತಿದ್ದೆವು. ಮಳೆಯಿದ್ದರೂ ಎಲ್ಲಾ ಯುದ್ಧ ಮುಖಗಳಲ್ಲಿಯೂ ನಾವು ಶತ್ರುವನ್ನು ತಡದಿದ್ದೇವೆ- ಅಥವಾ ಪುರೋಗಮನ ಮಾಡಿರುತ್ತೇವೆ. ಅರಕಾನ್ ರಂಗದಲ್ಲಿ ಶತ್ರುವನ್ನು ತಡದು ನಿಲ್ಲಿಸಿದ್ದೇವೆ. ಕಲಡಾನ್ ರಂಗದಲ್ಲಿ ಶತ್ರುವನ್ನು ಹಿಂದಟ್ಟಿ ಮುಂದುವರಿದಿದ್ದೇವೆ. ಟಿಡ್ಡಿಂನಲ್ಲಿ ಮುಂದೆ ಸಾಗಿದ್ದೇವೆ ಹಾಕಾ ರಂಗದಲ್ಲಿ ಅವರನ್ನು ತಡೆದಿದ್ದೇವೆ. ಸಂಖ್ಯಾ ಬಲದಲ್ಲಿಯೂ, ಸಹಾಯ ಸಂಪತ್ತಿನಲ್ಲಿಯೂ ಮತ್ತು ಆಹಾರದಲ್ಲಿಯೂ ಶತ್ರುವು ನಮಗಿಂತ ಅನುಕೂಲನಾಗಿದ್ದರೂ ನಾವಿಷ್ಟು ಮಾಡಿರುತ್ತೇವೆ.

ಮಳೆಗಳು ಬರಲು ನಾವು ಇಂಪಾಲದ ಮುತ್ತಿಗೆಯನ್ನು ಸ್ವಲ್ಪ ನಿಲ್ಲಿಸಬೇಕಾಯಿತು. ಶತ್ರುವು ಯಾಂತ್ರಿಕ ಸೈನ್ಯಗಳನ್ನು ಕಳುಹಿಸಿ ಕೋಹಿಮಾ ಇಂಪಾಲ್ ರಸ್ತೆಯನ್ನು ಹಿಡಿದರು. ನಾವೇನು ಮಾಡಬೇಕೆಂದು ಯೋಚಿಸಿದೆವು. ನಮಗೆ ಎರಡೇ ಮಾರ್ಗಗಳಿದ್ದವು. ಭಿಷೇಪುರ್ ಮತ್ತು ಪಾಲೆರ್‌ಲೈನ್ ಹಿಡಿಯುವುದು ಮತ್ತು ಶತ್ರು ಮುಂದೆ ಬರದಂತೆ ತಡೆಯುವುದು ಅಥವಾ ಅನುಕೂಲ ಸ್ಥಾನಗಳನ್ನು ಹಿಡಿದು ಸಮಯ ಕಾಯುವುದು.

ಈ ಕದನದಿಂದ ನಮಗಾಗಿರುವ ಪ್ರಯೋಜನಗಳೂ ಇವೆ. ನಾವು ಅಗ್ನಿಪರೀಕ್ಷೆಯಲ್ಲಿ ಗೆದ್ದಿದ್ದೇವೆ. ನಾಗರಿಕರಿಂದ ಸೈನ್ಯಕ್ಕೆ ತೆಗೆದುಕೊಂಡವರನ್ನು ಒಂದುಬಾರಿ ಮದ್ದುಗುಂಡುಗಳು ಮುಗಿದುಹೋಗಲು ವಾಪಸ್ಸು ಬನ್ನಿರೆನ್ನಲಾಯಿತು. ಅವರು ಹಿಂದೆ ಬರಲು ಬಯಸಲಿಲ್ಲ. ಬಾಯಿನೆಟ್ಟುಗಳನ್ನು ಹಿಡಿದು ಮುಂದೆ ನುಗ್ಗಿ ಶತ್ರುಗಳನ್ನು ಜಯಿಸಿದರು.

ಈ ಯುದ್ಧದಿಂದ ನಮ್ಮ ದಳಗಳಿಗೆ ಭರವಸೆಯು ಬಂದಿದೆ. ಶತ್ರುಗಳೊಡನೆ ಇರುವ ಭಾರತೀಯ ದಳಗಳು ನಮ್ಮೊಡನೆ ಸೇರಲು ಅಪೇಕ್ಷಿಸುತ್ತವೆ. ಈಗ ಅವರನ್ನು ನಮ್ಮೊಡನೆ ಕರೆದುಕೊಳ್ಳುವುದಕ್ಕೆ ನಾವು ಪ್ರಯತ್ನ ಮಾಡಬೇಕು. ನಾವು ಶತ್ರುವಿನ ಯುದ್ಧತಂತ್ರಗಳನ್ನು ತಿಳಿದವರಾಗಿರುತ್ತೇವೆ. ಶತ್ರುವಿನ ಕಾಗದ ಪತ್ರಗಳು ನಮಗೆ ಸಿಕ್ಕಿರುತ್ತವೆ. ನಮ್ಮ ಸೈನಿಕರು ಪಡೆದಿರುವ ಅನುಭವವು ಅಪಾರವಾಗಿರುತ್ತದೆ. ಈ ದಂಡಯಾತ್ರೆಯು ಆರಂಭವಾಗುವ ಮೊದಲು ಜಪಾನರಿಗೆ ನಮ್ಮಲ್ಲಿ ನಂಬಿಕೆಯಿರಲಿಲ್ಲ. ಅವರು ನಮ್ಮ ದಳಗಳನ್ನು ಒಡೆದು ತಮ್ಮ ದಳಗಳೊಂದಿಗೆ ಸೇರಿಸಿಕೊಳ್ಳಬೇಕೆಂದಿದ್ದರು. ಒಂದು ರಣಾಂಗಣವನ್ನು ನಮಗೆ ಬಿಟ್ಟುಕೊಡಬೇಕೆಂಬುದು ನನ್ನ ಇಷ್ಟವಾಗಿತ್ತು. ಕಡೆಗೆ ನನ್ನ ಅಭಿಮತವೇ ನಡೆಯಿತು. ನಮ್ಮ ಡಿವಿಷನಲ್ ಕಮಾಂಡರ್ ಮತ್ತು ಇತರ ಅಧಿಕಾರಿಗಳು ಪ್ರಶಸ್ತವಾದ ಅನುಭವ ಪಡೆದಿದ್ದಾರೆ.

ನಮ್ಮ ಕೊರತೆಗಳು ನಮಗೆ ತಿಳಿದುಬಂದಿರುತ್ತವೆ. ವಿಪರೀತವಾದ ಮಳೆಗಳಿಂದ ನಮ್ಮ ವಾಹನಸೌಕರ್ಯ ಮತ್ತು ಸರಬರಾಜು ಸರಿಯಾಗಿರಲಿಲ್ಲ. ಸೈನ್ಯಗಳ ಮುಂದೆ ನಮಗೆ ಪ್ರಚಾರ ದಳಗಳಿರಲಿಲ್ಲ. ನಮ್ಮಲ್ಲಿ ಈ ದಳವೇರ್ಪಡಿಸಲಾಗಿದ್ದರೂ ವಾಹನಗಳ ಅಸೌಕರ್ಯದಿಂದ ನಾವಿದನ್ನು ಉಪಯೋಗಿಸಲಾಗಲಿಲ್ಲ ನಮಗೆ ಲೌಡ್‌ಸ್ಪೀಕರುಗಳು ಬೇಕಾಗಿದ್ದವು. ಆದರೆ ಜಪಾನಿಯರು ನಮಗದರ ಸಹಾಯಮಾಡಲಿಲ್ಲ. ನಮಗೆ ಬೇಕಾದುದನ್ನು ನಾವೇ ಮಾಡಿಕೊಳ್ಳುತ್ತೇವೆ.

## ಆ ದಿನದ ಮಹಾ ಆಜ್ಞೆ

ಸಿಪಾಯಿ-ಸಲಾರ್ ನೇತಾಜೀ ಒಂದು ಮಹಾ ಆಜ್ಞೆಯನ್ನು ಹೊರಡಿಸಿ ಮುಂಗಾರಿಗಾಗಿ ಫೌಜ್ ಕಾರ್ಯಾಚರಣೆ ನಿಲ್ಲಬೇಕೆಂದು ಹೇಳಿದರು. ಎಲ್ಲರೂ ಮುಂದಿನ ಹೋರಾಟಕ್ಕೆ ಸಿದ್ಧವಾಗಬೇಕೆಂದು ಎಚ್ಚರಿಸಿದರು.

ಅದರ ವಿವರಗಳು ಯಾವ ರೀತಿಯಾಗಿದೆ ಎಂದರೆ—ಬ್ರಿಟಿಷ್ ಅಧಿಕಾರಿಗಳು ಶತಮಾನ ಕಾಲಕ್ಕಿಂತ ಹೆಚ್ಚುಕಾಲ ಭಾರತವನ್ನು ಕೊಳ್ಳೆ ಹೊಡೆದು ಹಣ ಸಂಪಾದಿಸಿಕೊಂಡಿರುತ್ತಾರೆ. ವಿದೇಶಗಳಿಂದ ಸಿಪಾಯಿಗಳನ್ನು ಕರೆಸಿಕೊಂಡಿರುತ್ತಾರೆ. ಇವರನ್ನು ಕೂಡಿಸಿ ನಮ್ಮ ವಿರೋಧವಾಗಿ ಒಂದು ದೊಡ್ಡ ಸೇನೆಯನ್ನು ನಿರ್ಮಾಣಮಾಡಿರುತ್ತಾರೆ ನಮ್ಮ ಸೇನೆಗಳು ಇಂಡೋ-ಬರ್ಮಾ ಸರಹದ್ದನ್ನು ದಾಟಿ ಧರ್ಮಕ್ಕಾಗಿ ಹೋರಾಡುತ್ತಿದ್ದೇವೆಂಬ ಆವೇಶದಿಂದ ತಮಗಿಂತ ಅಧಿಕಸಂಖ್ಯಾತರೂ, ಸಾಯುಧರೂ ಆದರೂ ಭಿನ್ನಭಿನ್ನವಾಗಿರುವಂತಹ ಆ ಶತ್ರುಸೇನೆಯೊಳಗೆ ನುಗ್ಗಿ ವಿಜಯಿಗಳಾಗಿರುತ್ತಾರೆ.

ನಮ್ಮ ಸೇನೆಗಳು ಸುರಕ್ಷಿತವಾಗಿ ಭಾರತ ಸ್ವಾತಂತ್ರಕ್ಕೋಸ್ಕರ ಯಶೋವಾ-ಮೃತ್ಯುರ್ವಾ ಎಂದು ಶತ್ರುವಿನಲ್ಲಿ ಆಧಿಕ್ಯತೆಯನ್ನು ಪ್ರಕಟಿಸಿತು. ಶತ್ರುವಿನ ನೈತಿಕ ಬಲವು ಒಂದೊಂದು ಅಪಜಯದಿಂದಲೂ ಕುಗ್ಗಿ ಹೋಗಿರುತ್ತದೆ.

ನಿಮ್ಮ ಸೇನೆಗಳು ಉದ್ಯೋಗಿಗಳೂ ಅತ್ಯಂತ ಕ್ಲಿಷ್ಟ ಪರಿಸ್ಥಿತಿಯಲ್ಲಿ ಧೈರ್ಯ ಪರಾಕ್ರಮಗಳಿಂದ ಹೋರಾಡಿ ಪ್ರಶಸ್ತ ಪಾತ್ರವಾಗಿರುತ್ತದೆ. ತಮ್ಮ ರಕ್ತವನ್ನು ಧಾರೆ ಎರೆದು-ಎಷ್ಟೋ ತ್ಯಾಗವನ್ನು ಮಾಡಿ ಈ ವೀರರು ಸ್ವಾತಂತ್ರ ಭಾರತ ವೀರರು ನಿಲ್ಲಿಸುವಂತಹ ರೀತಿಯಲ್ಲಿ ಸಂಪ್ರದಾಯಗಳನ್ನು ಸ್ಥಾಪಿಸಿದರು. ಇಂಪಾಲಿನ ಮೇಲೆ ಕಡೆಯ ಯುದ್ಧ ಸನ್ನಾಹ ಪ್ರಯತ್ನಗಳೆಲ್ಲವೂ ಪೂರ್ಣವಾಗಿರುತ್ತವೆ.

ಈಗ ಮಳೆಗಳು ಜೋರಾಗಿ ಸುರಿಯುತ್ತಿವೆ. ಅದರಿಂದ ಇಂಫಾಲ್ ಮೇಲಿನ ಧಾಳಿಯು ಅಸಾಧ್ಯವಾಗಿರುತ್ತದೆ. ಅದರಿಂದ ಫೌಜ್ ಕಾರ್ಯಾಚರಣೆಯನ್ನು ನಿಲ್ಲಿಸಿದೆ. ಹಾಗೆಯೇ ಯುದ್ಧವನ್ನು ಮುಂದುವರಿಸುವುದು ನಮ್ಮ ಸೈನ್ಯಗಳಿಗೆ ಹಿತಕರವಲ್ಲ.

ಮತ್ತೊಂದು ಅನುಕೂಲ ಸ್ಥಾನವು ಸಿಕ್ಕುವವರೆಗೆ ಸೈನ್ಯಗಳನ್ನು ಉಪಸಂಹರಿಸಿಕೊಳ್ಳುವುದು ಒಳ್ಳೆಯದೆಂದು ಭಾವನೆ ಮಾಡಿದೆವು. ಅದೇ ಪ್ರಕಾರ

ಮಾಡಲಾಯಿತು. ಅನುಕೂಲ ವಾತಾವರಣವು ಏರ್ಪಟ್ಟಾಗ ಪುನಃ ಯುದ್ಧವನ್ನು ಪ್ರಾರಂಭಿಸಬಹುದೆಂದು ಅದಕ್ಕೆ ಬೇಕಾದ ಪ್ರಯತ್ನಗಳನ್ನು ಮಾಡಲಾಯಿತು.

ಶತ್ರುಗಳನ್ನು ಅನೇಕ ಕಡೆ ಸೋಲಿಸುವುದರಿಂದ ಅಂತಿಮ ಜಯವನ್ನು ಪಡೆಯುವುದು ಸಾಧ್ಯವೆಂದೂ ಆಂಗ್ಲೋ ಅಮೇರಿಕನ್ ಸೇನೆಗಳನ್ನು ನಾಶ ಮಾಡಬಲ್ಲೆವೆಂದೂ ವಿಶ್ವಾಸವು ಒಂದಕ್ಕೆ ಹತ್ತರಷ್ಟು ಉಂಟಾಯಿತು. ಪ್ರಯತ್ನಗಳೆಲ್ಲವೂ ಸಫಲವಾದನಂತರ ಶತ್ರುವಿನೊಡನೆ ಪ್ರಬಲವಾಗಿ ಯುದ್ಧ ವನ್ನು ನಡಸುತ್ತೇವೆ. ನಮಗೆ ಯುದ್ಧ ಶಕ್ತಿ, ಧೈರ್ಯ, ವಿಧಿನಿರ್ವಹಣ ಭರಿ ಶ್ರದ್ಧೆಗಳು ಹೆಚ್ಚಾಗಿರುವುದರಿಂದ ಈ ಯುದ್ಧದ ವಿಜಯವು ನಮ್ಮದೇ. ಈ ಯುದ್ಧದಲ್ಲಿ ಪ್ರಾಣಗಳನ್ನು ಅರ್ಪಿಸಿದವರ ಆತ್ಮಗಳು ನಮ್ಮನ್ನು ಅತ್ಯಧಿಕ ಧೀರ ಧೈರ್ಯ ಕೃತ್ಯಗಳನ್ನು ಮಾಡಿ ಭಾರತ ಸ್ವಾತಂತ್ರ ಯುದ್ದ ಮಾಡು ವಂತೆ ಪ್ರೋತ್ಸಾಹಿಸಬಲ್ಲವು.

## ಮುಂಗಾರಿನ ನಂತರ

ಅನಂತರ ಅಜಾದ್ ಫೌಜ್ ಯುದ್ಧಾರಂಭ ಮಾಡಿದುದು ಮುಂಗಾರು ಮಳೆಯು ನಿಂತ ಮೇಲೆ ಅಷ್ಟು ಹೊತ್ತಿಗೆ ಅಂತರಾಷ್ಟ್ರೀಯ ಪರಿಸ್ಥಿತಿಗಳೂ ಸಹ ಬಹಳ ವ್ಯತಿರೇಕವಾಗಿದ್ದವು. ಯೂರೋಪಿನ ಯುದ್ಧದಲ್ಲಿ ಇಂಗ್ಲೆಂಡ್ ಮತ್ತು ಅಮೇರಿಕಾಗಳು ಜಯ ಪಡೆಯುತ್ತಿದ್ದವು. ಆಫ್ರೀಕಾದಲ್ಲಿ ವಿಜಯ ಪರಂಪರೆಗಳನ್ನು ಪಡದ ನಂತರ ಜರ್ಮನರು ಮಧ್ಯ ಪ್ರಾಚ್ಯದ ಕಡೆಗೆ ಬರು ವರೆಂದೂ ಆಗ ಬ್ರಿಟಿಷರಿಗೆ ಭಾರತದ ಎರಡು ಪಾರ್ಶ್ವಗಳಲ್ಲಿಯೂ ಬ್ರಿಟಿಷ ರಿಗೆ ಯುದ್ಧ ಮುಖಗಳು ಏರ್ಪಡುವುವೆಂದೂ ಬಗೆಯಲಾಗಿತ್ತು. ಭಾರತ ದಲ್ಲಿ ಅಜಾದ್ ಹಿಂದ್ ಫೌಜ್ ಸೈನಿಕರು ಪೂರ್ವ ಪಶ್ಚಿಮಗಳಿಂದ ಪ್ರವೇಶಿ ಸುವರೆಂದೂ ಭಾವನೆ ಮಾಡಲಾಗಿತ್ತು. ಆದರೆ ಜರ್ಮನಿಯು ಆಫ್ರಿಕದಲ್ಲಿ ಹಠಾತ್ತನೆ ಯುದ್ಧವನ್ನು ಕಳದುಕೊಂಡುದರಿಂದ ಅಜಾದ್ ಹಿಂದ್ ಫೌಜ್

ಸೈನಿಕರು ಕೇವಲ ಪೂರ್ವದಿಂದ ಮುತ್ತುವುದೊಂದು ಮಾರ್ಗವು ಮಾತ್ರ ಉಳಿದಿದ್ದಿತು.

ಇದರ ಮೇಲೆ ಇನ್ನೊಂದು ವಿಷಯವಿದೆ. ಅದೇನೆಂದರೆ—ಅಜಾದ್ ಹಿಂದ್ ಫೌಜ್ ಯುದ್ಧಮಾಡಲು ಆಹಾರ-ಸರಬರಾಜು ಮುಂತಾದುವುಗಳು ಬಹಳ ಆವಶ್ಯಕವಾಗಿದ್ದಿತು. ಜಪಾನೀಯರು ಅದರ ವಿಷಯದಲ್ಲಿ ಸಹಾಯ ಮಾಡುವರೆಂದು ಭಾವಿಸಲಾಗಿತ್ತು. ಪ್ರಥಮ ದಂಡಯಾತ್ರೆಯಲ್ಲಿ ಜಪಾನರು ಸಹಾಯ ಮಾಡುವುದಿಲ್ಲವೆಂದು ಅಜಾದ್ ಫೌಜ್ ಕೇವಲ ತನ್ನ ಬಲದಿಂದ ಭಾರತ ಸ್ವಾತಂತ್ರ್ಯೋದ್ಯಮದ ಪ್ರಯತ್ನವನ್ನು ಮುಂದುವರಿಸಬೇಕೆಂದೂ ದೃಢವಾಯಿತು. ಈ ರೀತಿಯಾದ ಅನೇಕ ಬಗೆಯ ಆತಂಕಗಳಿದ್ದರೂ ಭಾರತ ಸ್ವಾತಂತ್ರಸಿದ್ಧಿಯನ್ನು ಪ್ರೇರಿತರಾದ ಅಜಾದ್ ಫೌಜ್ ವೀರರು ಮುಂದುವರಿದರು.

ಮುಂದಿನ ಯುದ್ಧಕ್ಕಾಗಿ ಸೇನೆಗಳು ಹೋಗಬೇಕಾಗಿದ್ದಿತು. ಆ ಕಾಲದಲ್ಲಿ ಸೇನೆಗಳು ಉದ್ದೇಶಮಾಡಿ ನೇತಾಜಿ ಮಾತನಾಡಿದರು. ಕಳೆದ ವರ್ಷ ಅಜಾದ್ ಫೌಜ್ ತೋರಿದಂತೆ ನೀವೂ ಅಖಂಡಶೌರ್ಯ ತೋರಬೇಕು. ಕಳೆದ ವರ್ಷ ಕೆಲವರು ನಮ್ಮ ಗುಂಪು ಬಿಟ್ಟುಹೋದರು ಈ ಬಾರಿ ಹಾಗಾಗಬಾರದು. ಅಗ್ರರಂಗಗಳಿಗೆ ಹೋಗಲು ಹಿಂಜರಿಯುವವರು ಇಲ್ಲಿಯೇ ಇದ್ದುಬಿಡಿರಿ ಎಂದು ಹೇಳಿದರು.

## ೧೪ನೇ ಸೇನೆಯನ್ನು ತಡೆಯಿತು

೧೯೪೫ ಜನವರಿಯಲ್ಲಿ ಅಜಾದ್ ಹಿಂದ್ ಫೌಜ್ ಯುದ್ಧರಂಗಕ್ಕೆ ಯುದ್ಧರಂಗಕ್ಕೆ ಹೊರಡಲು ಆರಂಭವಾಯಿತು. ಫೆಬ್ರವರಿ ಮಧ್ಯಭಾಗ ಹೊತ್ತಿಗೆ ಸೇನೆಗಳು ಯುದ್ಧಮುಖದಲ್ಲಿದ್ದವು.

ಚೈನಾ ಸೈನ್ಯಗಳು ಬಾಯೂ ಹಿಡಿದವು. ಬ್ರಿಟಿಷರು ಬುಧಿಟಾಂಗ್ ಸ್ವಾಧೀನಪಡಿಸಿಕೊಂಡರು.

ಯುದ್ಧವು ಒಂದು ದಿನ ಅನುಕೂಲವಾಗಿಯೂ ಮತ್ತೊಂದು ದಿನ ಅನಾನುಕೂಲವಾಗಿಯೂ ಇರುತ್ತದೆ.

ನೇತಾಜಿ ಹೇಳುತ್ತಿದ್ದರು—ಅಸ್ಸಾಂ ಮತ್ತು ಬಂಗಾಳಾ ಸರಹದ್ದುಗಳಲ್ಲಿ ಬ್ರಿಟಿಷರು ಅತ್ಯದ್ಭುತವಾಗಿ ಹೋರಾಡುತ್ತಾರೆ.

ಬ್ರಿಟಿಷರು ಅಕ್ಯಾಬ್‌ನಲ್ಲಿ ಬಂದಿಳಿದರು. ಅಜಾದ್ ಫೌಜ್‌ಗೆ ಪರಿಸ್ಥಿತಿಗಳು ಅನುಕೂಲವಾಗಿರಲಿಲ್ಲ. ೧ಳನೆಯ ಸೈನ್ಯವು ಗಟ್ಟಿಯಾದುದೆಂದು ಅಭಿಪ್ರಾಯವಿತ್ತು. ಆದರೂ ಫೌಜಿನವರಿಗೆ ಹೋರಾಡುವ ಧೃತಿಯಾಗಲೀ ವಿಜಯ ಪಡೆಯುವ ಭರವಸೆಯಾಗಲೀ ಕಂದಿರಲಿಲ್ಲ.

ಈ ಸಮಯದಲ್ಲಿ ಅಜಾದ್ ಫೌಜಿನವರಿಗೆ ಒಂದು ಸಂತೋಷಕರವಾದ ವರ್ತಮಾನವು ಬಂದಿತ್ತು. ಸುಭಾಷ್ ಬ್ರಿಗೇಡಿನವರು ೧ಳನೇ ಸೇನೆಯನ್ನು ತಡೆದು ನಿಲ್ಲಿಸಿದ್ದರು. ಆಶ್ಚರ್ಯಕರವಾದಂತಹ ವಿಜಯಗಳನ್ನು ಪಡೆದಿದ್ದರು.

ಫೆಬ್ರವರಿ ತಿಂಗಳ ಕಡೆಯಲ್ಲಿ ನೇತಾಜೀ ಯುದ್ಧರಂಗಕ್ಕೆ ಬಂದರು. ಸುಮಾರು ಅವರು ಪ್ರಧಾನ ಕಚೇರಿಗೆ ಬಂದದ್ದು ೨೫ನೇ ತಾರೀಖು ಇರಬಹುದು. ೧೨ ಗಂಟೆಯ ವೇಳೆಗೆ ಅಲ್ಲಿನ ದಳಾಧಿಪತಿಯಾದ ಷಾ ನವಾಜನನ್ನು ನೋಡಿದರು. ಷಾ ನವಾಜ್ ಪಾಪಾ ಯುದ್ಧ ರಂಗದ ಪರಿಸ್ಥಿತಿಯನ್ನು ವಿವರಿಸಿದರು. ಕಿಯೂನ್, ಪೆಡಾಲ್, ಪಾಪಾ ಯುದ್ಧರಂಗಗಳಿಗೆ ಹೋಗಿ ಬರಲು ನೇತಾಜಿಗೆ ಬಹಳ ಇಷ್ಟವಿದ್ದಿತು. ಆದಾಗುವುದಿಲ್ಲವೆಂದೂ ಅದು ವಿಪರೀತ ಅಪಾಯಕರವಾದ ಸಾಹಸವೆಂದೂ ಷಾನವಾಜ್ ಹೇಳಿದರು. ಆ ದಿನವೇ ಬ್ರಿಟಿಷ ರಾಗಿನ್‌ಬೆನ್ ಆಕ್ರಮಿಸಿಕೊಂಡು ಚಾಂಗ್‌ಭಾ ಮೇಲೆ ಪುರೋಗಮನ ಮಾಡುತ್ತಿದ್ದರು. ಮಿಚ್ಚೀಲಾ ಸೇತುವೆಯ ಮೇಲೆ ಬಾಂಬುಗಳನ್ನು ಹಾಕಿದರು.

ಹೀಗೆ ಯುದ್ಧರಂಗದಲ್ಲಿ ಅಜಾದ್ ಫೌಜ್‌ಗೆ ಉತ್ಸಾಹಕರವಾದಂತಹ ಘಟನೆಗಳಿರಲಿಲ್ಲ. ಪೆಸಿಫಿಕ್‌ನಲ್ಲಿ ಮೇಲಿಂದ ಮೇಲೆ ಅಪಜಯಗಳಾದುದರಿಂದ ಜಪಾನರು ಬರ್ಮಾದಲ್ಲಿ ಹೆಚ್ಚುಗಮನ ಕೊಡುತ್ತಿರಲಿಲ್ಲ. ಆದರಿಂದ

ಅವರಿಂದಾಗುತ್ತಿದ್ದ ಅಲ್ಪ ಸ್ವಲ್ಪ ಸಹಾಯವೂ ನಿಂತು ಹೋಯಿತು. ಅಜಾದ್ ಹಿಂದ್ ಫೌಜ್ ಏಕಮಾತ್ರವಾಗಿ ನಿಂತು ಹೋರಾಡಬೇಕಾಗಿತ್ತು.

ಬ್ರಿಟಿಷರು ಜಯಶೀಲರಾಗುತ್ತಿದ್ದಾಗಲೂ ಅಜಾದ್ ವೀರರು ಹೇಗೆ ಯುದ್ಧ ಮಾಡುತ್ತಿದ್ದರೆಂಬುದನ್ನು ತಿಳಿದುಕೊಳ್ಳಬಹುದಾದ ಈ ಕೆಳಗೆಕಂಡ ನಿದರ್ಶನಗಳನ್ನು ನೋಡಿರಿ.

ಒಂದು ಬಾರಿ ಕಾಂಡಿಯನ್ನೂ, ಬ್ರಿಟಿಷರ ಸ್ಥಾನದ ಬಲವನ್ನೂ ಅಜಾದ್ ಫೌಜಿನ ಖಾನ್ ಮಹಮದ್ ಎಂಬಾತನು ಮುತ್ತಿದನು. ಬೆಳಗಿನ ಜಾವ ೩ ಗಂಟೆಗೆ ಆರಂಭವಾದ ಕದನ ೬ ಗಂಟೆಗೆ ಮುಗಿಯಿತು. ೨೦೦ ಮಂದಿ ಬ್ರಿಟಿಷ್ ಪರ ಸೈನಿಕರು ಮರಣಹೊಂದುವುದೋ ಗಾಯಪಡುವುದೋ ಆಯಿತು. ಅಜಾದ್ ವೀರರಲ್ಲಿ ೧೧ ಮಂದಿಗೆ ಮಾತ್ರ ಗಾಯವಾಯಿತು. ನೇತಾಜೀಕೀ ಜೈ ಎಂಬ ನಿನಾದವು ಅವರು ಯುದ್ಧ ಮಾಡುತ್ತಿದ್ದ ಕಾಲದಲ್ಲಿ ಅವರನ್ನು ಪ್ರಚೋದಿಸುತ್ತಿತು.

## ಯೋಧರ ದುಃಖ

ಅಜಾದ್ ಬ್ರಿಗೇಡ್‌ನವರು ಲಾರೆನ್ಸ್ ಗೆದ್ದಿದರು. ಆ ಪ್ರದೇಶ ಮುತ್ತಲು ಹೋರಾಡುತ್ತಿದ್ದರು. ಆಗ ತಿರೋಗಮನ ಮಾಡಬೇಕೆಂದು ಆಜ್ಞೆ ಬಂತು. ಅವರಿಗೆ ದೆಹಲಿಗೆ ಹೋಗಬೇಕೆಂದು ಆಜ್ಞೆಯಾಗಿತ್ತು. ಸೀಪಾಯ್ ಸಲಾರ್ ನೇತಾಜೀ ಮುಖತಃ ಅವರಿಗಾ ಮಾತನ್ನು ಹೇಳಿದ್ದರು. ಯಾವ ಸಮಯದಲ್ಲಿಯೇ ಆಗಲೀ ತಿರೋಗಮನ ಮಾಡಬಾರದೆಂದು ಎಚ್ಚರಿಸಿದ್ದರು ಈ ಆಜ್ಞೆಯು ಶತ್ರುಗಳ ತಂತ್ರವಿರಬಹುದೆಂದು ಭಾವಿಸಿದರು.

ಅವರ ದಳಾಧಿಪತಿಗಳು ಹೇಳಿದರು. ಈಗ ತಿರೋಗಮನ ಮಾಡುವುದು ಸರಿ. ನಮ್ಮ ಬಳಿ ಮದ್ದು ಗುಂಡುಗಳಿಲ್ಲ. ಟ್ರಕ್-ಮೋಟಾರು ಕಾರುಗಳಿಲ್ಲ. ಚಿಂಡ್ವಿನ್ ದಾಟಿದೊಡನೆಯೇ ನಮ್ಮ ಆಹಾರ ಪದಾರ್ಥಗಳು ಮುಗಿದುಹೋದುವು. ಹುಲ್ಲು ಮತ್ತು ಬೇರುಗಳನ್ನು ತಿಂದು ಬದುಕುತ್ತಿದ್ದೇವೆ. ನಮ್ಮಲ್ಲಿ ಹಲವರಿಗೆ ಜ್ವರ ಬರುತ್ತಿದೆ. ಮಲೇರಿಯಾ ಜೋರಾ

ಗಿದೆ. ನಮ್ಮ ಔಷಧಿಗಳು ಮುಗಿದಿದೆ. ನಾವು ಹಿಂತಿರುಗದೇ ವಿಧಿಯೇ ಇಲ್ಲ.

ಆದರೆ ಸೈನಿಕರು ಪ್ರತಿಭಟಿಸಿದರು. ನಾವು ಇದುವರೆಗೆ ಹುಲ್ಲುಬೇರುಗಳನ್ನು ತಿಂದು ಬದುಕಿದ್ದೇವೆ. ನಾವು ಅದರಿಂದಲೇ ಇನ್ನೂ ಬದುಕಬಲ್ಲೆವು. ನಾವು ಶತ್ರುಗಳನ್ನು ಹಿಂದೊತ್ತಬೇಕು. ನೇತಾಜಿಯ ಮಾತನ್ನು ಮೀರುವುದಿಲ್ಲ.

ಈ ಸೈನಿಕರು ಇರವಾಡೀ ಪಾಳಯದಲ್ಲಿ ಎರಡು ಬಾರಿ ಬ್ರಿಟಿಷ್ ಸೈನಿಕರನ್ನು ಹಿಮ್ಮೆಟ್ಟಿಸಿದರು.

ನಾಯಕರು ಹೇಳಿದರು. ಜಪಾನರು ಹಿಮ್ಮೆಟ್ಟಿದರು. ನಾವು ಹಿಮ್ಮೆಟ್ಟದೇ ವಿಧಿಯಿಲ್ಲ. ಆದರೆ ಸೈನಿಕರು ಕೇಳಲಿಲ್ಲ. ನಾವು ಮುಂನುವರಿಯೋಣ. ಸಮಯ ಸಿಕ್ಕಿರುವಾಗ ಶತ್ರುವನ್ನು ಜಯಿಸೋಣ.

ದಳಪತಿಗಳು ಒಬ್ಬನನ್ನು ಪ್ರಧಾನ ಕಚೇರಿಗೆ ಕಳುಹಿಸಿದರು. ಅವನು ತಿರೋಗಮಿಸಬೇಕೆಂದು ಸಿಪಾಯಿ ಸಲಾರ್ ನೇತಾಜೀ ಸ್ವಹಸ್ತದಿಂದ ಬರೆದಂತಹ ಆಜ್ಞೆಯನ್ನು ತಂದನು. ಈಗ ಬಂದು ಪ್ರತಿ ವಿರೋಧದ ಮಾತೂ ಇರಲಿಲ್ಲ. ಪ್ರತಿಭಟನೆಯು ಅಳುವೊಗದ ಮತ್ತು ಕಣ್ಣೀರಿನ ರೂಪವನ್ನು ಧರಿಸಿದವು. ಈ ಬಲಶಾಲಿಗಳೂ ಧೈರ್ಯಶಾಲಿಗಳೂ ಆದ ಯೋಧರು ಮಕ್ಕಳಂತೆ ಗೋಳಾಡಿದರು. ಮುರಿದ ಮನಸ್ಸಿನಿಂದ ಅವರು ರಣಾಂಗಣಕ್ಕೆ ಬೆನ್ನು ತಿರುಗಿಸಿದರು. ತಿರೋಗಮನ ಮಾಡಿದರು. ಅವರಲ್ಲಿ ಯಾರೂ ಆ ದಿನ ಏನನ್ನೂ ತಿನ್ನಲಿಲ್ಲ. ಇದೇ ಕಡೆಗಾಲದ ಪ್ರಾರಂಭವೇ? ಎಂಬ ಪ್ರಶ್ನಾರ್ಥಕ ಚಿನ್ಹೆಗಳೋ ಎಂಬಂತೆ ಅವರ ಮುಖಗಳು ಪೆಚ್ಚುಬಿದ್ದಿದ್ದವು.

ಹೌದು! ಅವರ ಪೆಚ್ಚು ಮೋರೆಗಳು ಧರಿಸಿದ್ದ ಪ್ರಶ್ನಾರ್ಥಕ ಚಿನ್ಹೆಗಳು ನಿಜವಾಯಿತು. ಅದೇ ಕಡೆಯ ದಿನಗಳ ಪ್ರಾರಂಭವಾದವು.

ಮುಂದಿನ ಇತಹಾಸವು ಅಜಾದ್ ಹಿಂದ್ ಫೌಜ್‌ನ ಯುದ್ಧಕಾಂಡದಲ್ಲಿ ವಿಷಾದಕರವಾದ ಚರಿತ್ರೆ. ಇಲ್ಲಿಗೆ ಸಾಕು. ನಾವಿನ್ನು ಈ ಇತಿಹಾಸವನ್ನು ಮುಂದೆ ವರ್ಣಿಸಲಾರೆವು.

---

ವೀರಕೇಸರಿ ಪ್ರೆಸ್, ಶೇಷಾದ್ರಿಪುರ, ಬೆಂಗಳೂರು—೧೯೪೫.